ಪ್ರಕಟಣೆ – ೨

# ಎದ್ದೇಳು ಕನ್ನಡಿಗ !

( ಕವಿತಾಸಂಕಲನ )

---

ಸಂಪಾದಕರು :

**ಶಾಮ ಭಟ್, ಪೊಸವಣಿಕೆ,**

ಕಾಸರಗೋಡು.

---

ಮುದ್ರಕರು :

**ಎಸ್. ಕೃಷ್ಣ ಭಟ್,**

ಪ್ರೊಪ್ರ್ಯೈಟರ್:

ಸಿರಿಗನ್ನಡ ಪ್ರೆಸ್, ಕಾಸರಗೋಡು, ದ. ಕ.

---

ಪ್ರಕಾಶಕರು :

**ಪಂಪ ಪ್ರಕಾಶನ, ಕಾಸರಗೋಡು,**

**ದ. ಕನ್ನಡ.**

ಬೆಲೆ : 0–2–6

ಪ್ರಥಮ ಮುದ್ರಣ, ನವಂಬರ ೧೯೫೫.



## ಅರ್ಪಣೆ.

---

ಕನ್ನಡ ನಾಡಿನ ಏಳ್ಗೆಗಾಗಿ ದುಡಿಯುತ್ತಿರುವ
ಸೋದರ ಸೋದರಿಯರಿಗೆ

— ಲೇಖಕರು.



೧೨-೧೧-೧೯೫೫.

# ಕಾಸರಗೋಡು ಕನ್ನಡದ ಜೀವನಾಡಿ.

ಚಂದ್ರಗಿರಿ (ಪಯಸ್ವಿನಿ) ನದಿಯ ಉತ್ತರ ಭಾಗದ ಎರಡು ಲಕ್ಷ ಕನ್ನಡಿಗರಿಂದು ಅದೃಷ್ಟಹೀನರಾದರು. ಅವರೆಂದೂ ತಾವು ಕನ್ನಡದಿಂದ ಬೇರಾಗುವೆವೆಂದು ಕನಸಿನಲ್ಲಿಯೂ ನಂಬಿರಲಿಕ್ಕಿಲ್ಲ. ಕೆಲವು ವರ್ಷಗಳ ಹಿಂದೆ ಅಖಂಡ ಕರ್ಣಾಟಕದ ಸಾಹಿತ್ಯ ಪರಿಷತ್ತು ಇಲ್ಲಿ ಜರಗಿದಾಗ ಕಾಸರಗೋಡು ಕರ್ಣಾಟಕದ ಕಣ್ಣಾಗಿ ರಂಜಿಸಿತು. ಕರ್ಣಾಟಕದ ಮೂಲೆ ಮೂಲೆಗಳಿಂದಲೂ ಕನ್ನಡಿಗರಿಲ್ಲಿ ಬಂದು ಪರಿಷತ್ತು ಜರಗಿಸಿ ಕಾಸರಗೋಡನ್ನು ಕನ್ನಡದ ಪುಣ್ಯ ಭೂಮಿಯಾಗಿ ಮಾಡಿದರು. ಕನ್ನಡದ ಜಾನಪದ ಕಲೆಯ ಸೀಮಾಪುರುಷ ಪಾರ್ತಿ ಸುಬ್ಬನ ಕಾರ್ಯಕ್ಷೇತ್ರವಿದು ಯಕ್ಷಗಾನದ ತವರೂರಾಯಿತು. ಇದು ಆಸ್ಥಾನ ಕವಿ - ಕನ್ನಡಿಗರ ಕುಲಗುರು ಗೋವಿಂದ ಪೈಗಳು ಕನ್ನಡ ಸಾಹಿತ್ಯದ ಉಗ್ರ ತಪವನ್ನಾಚರಿಸಿದ ತಪೋವನವಾಯಿತು. ಇಪ್ಪತ್ತು ಸಾವಿರಕ್ಕಿಂತ ಹೆಚ್ಚಿನ ಕನ್ನಡ ಚಿಣ್ಣರು ದಿನಾಲೂ ಕನ್ನಡದ ದಿವ್ಯ ಮಂತ್ರವನ್ನು ಪಠಿಸುವ ಕಾಸರಗೋಡು ಕನ್ನಡನಾಡು ಮಾತ್ರವಲ್ಲ - ಅದು ಕನ್ನಡದ ಜೀವನಾಡಿಯೂ ಹೌದು.

ಇಂದು ಕಾಸರಗೋಡಿನ ಅಗ್ನಿ ಪರೀಕ್ಷೆಯಾಗುತ್ತಿದೆ. ಅದರ ಜತೆಯಲ್ಲೆ ನಮ್ಮ ಪರೀಕ್ಷೆಯೂ ನಡೆಯುತ್ತಿದೆ. ಕಾಸರಗೋಡನ್ನು ಕರ್ಣಾಟಕದಲ್ಲಿ ಉಳಿಸಲಾರದೆ ಹೋದರೆ ಕನ್ನಡ ಪರಂಪರೆಗೇ ಕಲಂಕವಾದೀತು, ಕನ್ನಡದ ಮುಂದಿನ ಪೀಳಿಗೆಗೆ ಘೋರವಾದ ಘಾತಕವಾದೀತು. ಎರಡು ಲಕ್ಷ ಕನ್ನಡಿಗರ ದಹನವಾದೀತು.

ಆಕ್ರಮಣ ಮನೋವೃತ್ತಿ ಇರುತ್ತಿದ್ದರೆ, ತಲತಲಾಂತರಗಳಿಂದಲೂ ದಕ್ಷಿಣ ಕನ್ನಡದ ಅವಿಭಾಜ್ಯ ಅಂಗವಾಗಿ ಬೆಳೆದುಬಂದ ಜಿಲ್ಲೆಯ ತುತ್ತ ತುದಿಯ ವರೆಗೆ ಕನ್ನಡಕ್ಕಾಗಿ ಕೇಳಬಹುದಿತ್ತು. ಜಿಲ್ಲೆಯನ್ನು ತುಂಡರಿಸದೆ ಒಂದೇ ಘಟಕವಾಗಿ ತೆಗೆದುಕೊಂಡೇ ಪ್ರಾಂತರಚನೆಯಾಗಬೇಕೆಂಬ ಕೂಗೆಬ್ಬಿಸಬಹುದಿತ್ತು. ಆದರೆ, ಚಂದ್ರಗಿರಿ ನದಿಯ ದಕ್ಷಿಣಕ್ಕೆ ಬಹುಸಂಖ್ಯಾಕ ಮಲೆಯಾಳಿಗಳೆಂಬ ಕಟುಸತ್ಯವನ್ನು ಯಾರಿಗೂ ಅಲ್ಲಗಳೆಯಲು ಸಾಧ್ಯವಿಲ್ಲ. ಅದಕ್ಕಾಗಿಯೇ ಚಂದ್ರಗಿರಿ ನದಿಯ ಸಂಪೂರ್ಣ ಕನ್ನಡ ಪ್ರದೇಶವಾದ ಉತ್ತರ ಭಾಗವಾದ 274 ಚ. ಮೈಲು ವಿಸ್ತೀರ್ಣದ ಕನ್ನಡ ನೆಲವನ್ನು ಮಾತ್ರ ಕೇಳಿದೆವು.

ಇದೇ ಮನೋಭಾವ ನಮ್ಮ ಮಲೆಯಾಳಿ ಬಂಧುಗಳೂ ತೋರಿದ್ದರೆ ಸಮಸ್ಯೆ ಎಂದೋ ಬಗೆಹರಿಯಬಹುದಿತ್ತು. ಕನ್ನಡಿಗರೂ ಮಲೆಯಾಳಿಗಳೂ ಸುಖವಾಗಿರಬಹುದಿತ್ತು. ಚಂದ್ರಗಿರಿ ನದಿಯ ಉತ್ತರ ಭಾಗ ಸಂಪೂರ್ಣ ಕನ್ನಡದ್ದೆಂಬ ಮಾತನ್ನು ಬುಸುಗುಟ್ಟುವ ಸರ್ಪದ ಹುತ್ತದ ಮೇಲೇರಿ ಹೇಳಬಹುದು ; ಕುದಿಯುವ ನೀರ ಮೇಲೆ ನಿಂತು ಹೇಳಬಹುದು ; ಉರಿಯುವ ಬೆಂಕಿಯ ಮೇಲೇರಿ ಹೇಳಬಹುದು — ಅಷ್ಟು ಸತ್ಯದ ಮಾತದು. ಸತ್ಯಕ್ಕೆ ಎತ್ತಲೂ ಭಯವಿಲ್ಲವಷ್ಟೆ ! ಸತ್ಯಕ್ಕೆ ಜಯ ದೊರಕಲೇ ಬೇಕು.

ಇತಿಹಾಸದ ಗತವೈಭವದ ಕುರಿತು ಈಗ ಹೇಳಿಕೊಂಡರೆ ಹೆಚ್ಚಿನ ಪ್ರಯೋಜನವಿಲ್ಲವೆಂಬುದು ನಿಜ. ಆದರೆ, ನಿಷ್ಪಕ್ಷಪಾತಿ ವಿದ್ವಾಂಸರು, ಇತಿಹಾಸ ಸಂಶೋಧಕರು, ಹೇಳಿದ ಮುತ್ತಿನಂತಹ ಮಾತನ್ನು, ಶಾಶ್ವತ ಗ್ರಂಥಗಳನ್ನು ಯಾರಿಂದ ಮರೆಮಾಚಲು ಸಾಧ್ಯ ? ಆಂಗ್ಲ, ಫ್ರಾನ್ಸಿಸ್ ಬುಚೆನನ್ ಎಂಬವನು ಹಿಂದೂದೇಶದ ಗವರ್ನರ್ ಜನರಲ್ ಮಾರ್ಕ್ವಿಸ್ ಓಫ್ ವೆಲ್ಲೆಸ್ಲಿಯ ಆಣತಿ ಮೇರೆಗೆ ಮದ್ರಾಸಿನಿಂದ ಮೈಸೂರು, ಕನ್ನಡ ಮತ್ತು ಮಲಬಾರು ದೇಶಗಳಲ್ಲಿ ಮಾಡಿದ ಪ್ರಯಾಣದ ವರದಿಯಲ್ಲಿ [Journey from Madras through the countries of Mysore, Canara and Malabar, performed under the orders of the Most Noble the Marquis of Wellesly, Governor General of India, by Francis Buchenen M. D.] ಒಂದು ಸನ್ನಿವೇಶದಲ್ಲಿ ಹೀಗೆಂದು ಬರೆಯುತ್ತಾನೆ.

........ಪಳ್ಳ ಎಂಬಲ್ಲಿ ಶಿವನ ಒಂದು ದೇಗುಲಕ್ಕೆ ನಾನು ಹೋದೆ. ನನ್ನ ಪ್ರಯಾಣದ ಮೊದಲ ದಾರಿ ಸಮುದ್ರದಿಂದ ಉಪ್ಪು ನೀರಿನ ನದಿಯೊಂದನ್ನು ಪ್ರತ್ಯೇಕಿಸಿದ ಅವೆರಡರ ಮಧ್ಯೆ ಇರುವ ಒಂದು ಮರಳ ದಿಣ್ಣೆಯಲ್ಲಿ. ಈ ಪ್ರದೇಶವನ್ನು ಕಳೆದರೆ, ಚಂದ್ರಗಿರಿ ನದಿಯ ತನಕ ಏರು ಗದ್ದೆಗಳ ಬಯಲು ಇದೆ. **ಚಂದ್ರಗಿರಿ ನದಿಯೇ ಮಲೆಯಾಳದ ಉತ್ತರದ ಗಡಿ.***

---

*I went to a temple dedicated to Iswara at a place called Palla. The first part of my journey was over a sandy spit, seperating a salt water-lake from the sea. Beyond this

ಕ್ರಿ. ಶ. 1828ರಲ್ಲಿ ಪ್ರಕಟಿಸಲ್ಪಟ್ಟ ಈಸ್ಟ್ ಇಂಡಿಯಾ ಗಜೆಟಿಯರಿನಲ್ಲಿ ಇನ್ನೂ ಹೆಚ್ಚಿನ ಸ್ಪಷ್ಟವಾದ ಸಂಗತಿಗಳು ಬರೆಯಲ್ಪಟ್ಟಿವೆ. [The East India Gazetter By Walter Hamilton. Second edition Vol. I, London.]

ಈ ಪುಸ್ತಕದ 338ನೇ ಪುಟದಲ್ಲಿ ನಾವು ಕನ್ನಡಕ್ಕಾಗಿ ಕೇಳುವ ಈ ಭಾಗದ ವಿವರಣೆ ಇದೆ.

**ದಕ್ಷಿಣ ಕನ್ನಡ** — "ಮಲಬಾರು ಅಂತ್ಯವಾಗುವ ಸ್ಥಳವಾದ ಚಂದ್ರಗಿರಿ ನದಿಯ ಉತ್ತರ ಪ್ರದೇಶವು ಹಿಂದಿಯರಿಂದ ತುಳುವ ದೇಶವೆಂದೂ, ಆಂಗ್ಲರಿಂದ ದಕ್ಷಿಣ ಕನ್ನಡವೆಂದೂ ಕರೆಯಲ್ಪಡುತ್ತದೆ."

[The country to the north of River Chandragiri where Malabar ends is called Tuluva by Hindus and South Kanara by British.]

ಚಂದ್ರಗಿರಿ ನದಿ ಕಾಸರಗೋಡು ಪಟ್ಟಣದಿಂದ ಎರಡು ಮೈಲು ದಕ್ಷಿಣಕ್ಕೆ ಎರಡು ಸುತ್ತಲೂ ತೆಂಗಿನ ಮರಗಳ ಮತ್ತು ಪೈರು ಪಚ್ಚೆಯಿಂದ ಕಂಗೊಳಿಸುವ ಸುಂದರವಾದ ಮತ್ತು ವಿಶಾಲವಾದ ನದಿ. ಇದರ ತೆಂಕು ದಡದ ಮೇಲೆ ಸ್ವಲ್ಪ ದೂರದಲ್ಲಿ ಕನ್ನಡ ರಾಜರಾದ ಇಕ್ಕೇರಿ 'ಅರಸರಾಡಂಬರವು ಮೆರೆದ' ಕನ್ನಡದ ಗತ ವೈಭವವನ್ನು ಇಂದಿಗೂ ಎತ್ತಿ ತೋರಿಸುವ ಚಚ್ಚೌಕದ ಅಳಿದುಳಿದ ಚಂದ್ರಗಿರಿ ಕೋಟೆ ಕಾಣಿಸುತ್ತಿದೆ.

ಮೇಲೆ ಹೇಳಿದ ಗಜೆಟಿಯರಿನ 392ನೇ ಪುಟದಲ್ಲಿ ಈ ಚಂದ್ರಗಿರಿ ಕೋಟೆಯ ವರ್ಣನೆಯೊಂದಿಗೆ ಕನ್ನಡ-ಕೇರಳದ ಗಡಿ ಯಾವುದೆಂದು ಹೇಳಿದೆ. ಅದರ ಉಲ್ಲೇಖ ಹೀಗಿದೆ —

**ಚಂದ್ರಗಿರಿ ಕೋಟೆ** — ಮಂಗಳೂರಿನಿಂದ 30 ಮೈಲು ತೆಂಕು ದಿಕ್ಕಿಗೆ ಮಲಬಾರು ಪ್ರಾಂತದಲ್ಲಿರುವ ವಿಶಾಲ ಮತ್ತು ಚಚ್ಚೌಕಾಕೃತಿಯ ಈ ಕೋಟೆ ಅದೇ ಹೆಸರಿನ ನದಿಯ ತೆಂಕು ದಿಕ್ಕಿನಲ್ಲಿ ನೆಲೆನಿಂತಿದೆ. ಮತ್ತು ಮಲಬಾರಿನ ಉತ್ತರದ ಗಡಿಯು ಇದೇ ಆಗಿದೆ.

(Chandragiri a large square Fort in the

---

the country rises into open rising lands all the way to Chandragiri River, which is the northern boundary of Malayala.

Malabar Province thirty miles south from Mangalore situated on the south side of a river of the same name **which is the northern boundary of Malayala or Malabar.)**

ಯಾವ ದೃಷ್ಟಿಯಿಂದ ನೋಡಿದರೂ ಚಂದ್ರಗಿರಿ ನದಿಯ ಉತ್ತರ ಭಾಗ ಕನ್ನಡ ನಾಡೆಂಬುದಕ್ಕೆ ಸೂರ್ಯ ಚಂದ್ರರೂ ಸಾಕ್ಷಿ ನುಡಿಯ ಬಹುದು. ಈ ಭಾಗದಲ್ಲಿ ಎಪ್ಪತ್ತು ಗ್ರಾಮಗಳಿವೆ. 140ಕ್ಕಿಂತ ಮಿಕ್ಕಿ ಗ್ರಾಮಾಧಿಕಾರಿಗಳಿದ್ದಾರೆ. ಅವರಲ್ಲಿ ಎರಡು ಮೂರು ಜನರ ಮನೆಭಾಷೆ ಮಲೆಯಾಳವಲ್ಲದೆ ಮಿಕ್ಕುಳಿದವರೆಲ್ಲಾ ಕನ್ನಡಿಗರೇ. ಆ ಮಾತನ್ನು ಅವರ ಹೆಸರುಗಳೇ ಬೆಟ್ಟುತೋರಿಸಿ ಹೇಳುತ್ತವೆ. ಪ್ರತಿ ವರ್ಷ ರಿಜಿಸ್ಟ್ರಿಯಾಗುವ ನಾಲ್ಕು ಸಾವಿರ ದಸ್ತಾವೇಜುಗಳಲ್ಲಿ ಹತ್ತನ್ನು ಬಿಟ್ಟರೆ ಉಳಿದುದು ಕನ್ನಡದಲ್ಲಿ. 164 ಶಾಲೆಗಳಲ್ಲಿ, 7 ಹೈಸ್ಕೂಲು ಗಳಲ್ಲಿ, 1 ಕಾಲೇಜಿನಲ್ಲಿ, 1 ಸರಕಾರಿ ಅಧ್ಯಾಪಕರ ತರಬೇತಿ ಶಾಲೆ ಯಲ್ಲಿ ಒಟ್ಟು ಇಪ್ಪತ್ತು ಸಾವಿರಕ್ಕಿಂತ ಮೇಲ್ಪಟ್ಟು ಕನ್ನಡ ವಿದ್ಯಾರ್ಥಿ ಗಳಿದ್ದಾರೆ.

ನಮ್ಮ ಕಲೆ, ಸಾಹಿತ್ಯ, ಸಂಸ್ಕೃತಿ, ಆಚಾರ ವಿಚಾರಗಳು, ಹಿಡುವಳಿ ಪದ್ಧತಿ ಎಲ್ಲವೂ ಕನ್ನಡದ್ದು. ತುಳು ಮಾತಾಡುವವರನ್ನು ಕನ್ನಡಿಗರೆನ್ನಲು ಹಿಂಜರಿಯುವವರಲ್ಲಿ ನಿಜವಾಗಿ ಅನುತಾಪ ಉಂಟಾ ಗುತ್ತದೆ. ಅವರಿಗೆ ನಿಜಸ್ಥಿತಿ ಗೊತ್ತಿರಲಿಕ್ಕಿಲ್ಲವೆಂದೇ ನೆನೆಸದೆ ವಿಧಿಯಿಲ್ಲ.

ಕನ್ನಡವನ್ನು ಬಿಟ್ಟು ನಾವು ಬದುಕಲಾರೆವು. ಕಾಸರಗೋಡಿನ ಕನ್ನಡಿಗರ ಹೋರಾಟ ವಿಫಲವಾಗಲಾರದು. ಈ ನಾಡಿನ ಜನ ಬಹು ಮುಖವಾಗಿ ವಿವಿಧ ರೀತಿಯಲ್ಲಿ ತಮ್ಮ ಪಾಲಿನ ಸೇವೆ ಸಲ್ಲಿಸುತಿದ್ದಾರೆ.

ನಮ್ಮ ರೋದನ ದಿಗಂತ ವ್ಯಾಪಿಯಾಗಲಿ. ಕಾಸರಗೋಡು ಕನ್ನಡಿಗರದ್ದಾಗಲಿ.

॥ ಜೈ ಕರ್ಣಾಟಕ ॥

— **ಕೆಳ್ಳಿಗೆ ಮಹಾಬಲ ಭಂಡಾರಿ,** ಎಂ.ಎ., ಎಲ್ ಎಲ್.ಬಿ.,
ಅಡ್ವಕೇಟ್, ಕಾಸರಗೋಡು.

---

# ಎದ್ದೇಳು ಕನ್ನಡಿಗ !

ಎದ್ದೇಳು ಕನ್ನಡಿಗ, ಸಿಡಿದೆದ್ದು ಗುಡುಗುಡುಗು ।
ಕನ್ನಡದ ಈ ಮಣ್ಣೆ ನಮ್ಮಳಿವು ಉಳಿವು ॥
ಕನ್ನಡದ ಈ ಭಾಗ ಭಿನ್ನವಾಗಲು ಬಿಡೆವು ।
ಮೊಳಗಿತದೊ ಕನ್ನಡದ ಕಹಳೆ ಕೇಳು ॥ ೧ ॥

ಬಳ್ಳಾರಿ, ಮಡಕಶಿರ, ಕಾಸರಾಗೋಡೆಂದು ।
ಕತ್ತರಿಸಿ ನುಂಗುವಾ ತುತ್ತಿದಲ್ಲ ॥
ಆಯೋಗ ನಮಗೇಕೆ? ನ್ಯಾಯ ಸಿಗಲೇಬೇಕು ।
ಸಮಿತಿಯಾ ಬರಹವದು ಬ್ರಹ್ಮಲಿಪಿಯಲ್ಲ ॥ ೨ ॥

ಭಾಷೆಗನ್ವಯ ಪ್ರಾಂತ್ಯ ರಚಿಸಲೆಂದೇ ಹೊರಟ ।
ಸಮಿತಿಗೇತಕೆ ಈ ತೆರದ ಪಕ್ಷಪಾತ ॥
ನುಡಿಯಂತೆ ನಡೆಯಿಲ್ಲ; ನಡೆಯಂತೆ ನುಡಿಯಿಲ್ಲ ।
ನ್ಯಾಯಮೂರ್ತಿಗಳಂತೆ! ಕೇಡಬಯಸಿದರೆ! ॥ ೩ ॥

ಕನ್ನಡದ ನಾಡೆಲ್ಲ ಐಕ್ಯ ಹೊಂದಲೆಬೇಕು ।
ಪ್ರತಿಭಟನೆ, ಹೋರಾಟವದಕಾಗಿ ಸಿದ್ಧ ॥
ನಡೆ ಮುಂದೆ, ನಡೆ ಮುಂದೆ, ಸಾಧನೆಯು ಗುರಿಯತ್ತ ।
ಪಡೆ ಜಯವ, ಪಡೆ ಯಶವ, ಅದೊ ವರದ ಹಸ್ತ ॥ ೪ ॥

— "ಶಾಮು" ಪೊಸವಣಿಕೆ.

# ಕನ್ನಡಾಂಬೆ

ಕನ್ನಡಾಂಬೆಯೆ ! ಜನ್ಮದಾತೆಯೆ !
ಎಂದು ನಗುವೊಗದೋರುವೆ ?
ಎಂದು ಕನ್ನಡ ಸುತರ ತಾಯಿಯೆ ?
ಪ್ರಗತಿ ಪಥವನು ಪಿಡಿಯುವೆ ?
ಎಂದು ನೀನಲಿದಾಡುವೆ ?
ಮತ್ತೆಂದು ಸಂತಸಗೊಳ್ಳುವೆ ? ॥ ೧ ॥

ಯಾರು ತುಂಬಿದ ಕೀರ್ತಿ ಶೋಭೆಯ
ಜಗಕೆ ತೋರುತಲಿದ್ದರೋ
ಯಾರು ನಿರತವು ನಿನ್ನ ಪ್ರೇಮದ
ಬೆಳಕ ಕಾಣುತಲಿದ್ದರೋ
ಅವರು ಕಣ್ಮರೆಯಾದರು
ವೀರಾಧಿವೀರರು ಧನ್ಯರು ॥ ೨ ॥

ಶೀಲ ಸುಜನರಿಗೊಲಿದ ದೇವಿಯೆ
ಇಂದದೇತಕೆ ಕೊರಗುವೆ ?
ಸಂದ ಯುಗದಲಿ ಗೆಲುವ ತಂದಿಹೆ
ಕಂದರೊರಗಿದರೆನುತಲೋ ?
ಅಮರರಾಗಿಯೆ ಪೋದರವರಿ
ನ್ನೆಂತು ಮರಳುವರಿಲ್ಲಿಗೆ ? ॥ ೩ ॥

ತಾಯ ವೈಭವ ಸೇವೆಗೈದಿಹ
ಶೂರ ಕುವರರು ಗತಿಸಲು
ನಿನ್ನ ಹಾಲನ್ನುಂಡು ಜಾಡ್ಯದಿ
ದಿನವ ದೂಡುತಲಿರುವೆವು
ನಿನ್ನ ಮಡಿಲಲ್ಲುಳಿದೆವು ನಾ-
ವಬಲರೆನಿಸುತ ಮೆರೆದೆವು ॥ ೪ ॥

ಹಿರಿಯ ವೈಭವ ಕೀರ್ತಿ ಶಿಖರವ
ಕಂಡು ಬೆರಳನು ಕಚ್ಚಿಹೆ
ಮೂರ್ಖ ಜನರತಿ ಸಲಿಗೆ ಬೆಳೆಸಲು
ಮಧುರ ಕನ್ನಡ ಕೆಟ್ಟಿತು
ಅವರಿಗಾಸರೆ ಕೊಟ್ಟಿವು ನಾ-
ವೀಗ ಪಾಮರರಾದೆವು ॥ ೫ ॥

ಸಾಕು ಚಿಂತೆಯನೊಗೆದು ಹರುಷದಿ
ಹರಸು ಕನ್ನಡ ಕಲಿಗಳ
ಸಹನೆ ಮೀರಿತು ತಾಯಿ! ಮೂಡಿತು
ನವ್ಯಜೀವನ ಚೇತನ!
ಐಕ್ಯ ಕರ್ನಾಟಕದ ವಿಜಯವು
ಮಾತೃಭೂಮಿಯ ಸೇವೆಯು ॥ ೬ ॥

— ಕೆ. ಎಂ. ಕೃಷ್ಣ, ಕುಂಬಳೆ.

---

# ಕನ್ನಡಿಗರುದ್ಘೋಷ ಕೇಳಿಬರಲಿ !

ಕೆಚ್ಚೆದೆಯ ಕನ್ನಡಿಗರೊಕ್ಕೊರಲ ಘೋಷವದು
ನಿರ್ಭೀತ ಹೃದಯದಿಂ ಹೊರಹೊಮ್ಮಲಿ ||
ಘನಘೋರ ಗಂಭೀರ ಸಿಂಹ ಘರ್ಜನೆಯಂತೆ |
ಕನ್ನಡಿಗರುದ್ಘೋಷ ಕೇಳಿಬರಲಿ || ೧ ||

'ಚಂದ್ರಗಿರಿ'ಯುತ್ತರಕೆ ಕನ್ನಡವನೊಪ್ಪಿರುವ |
ಪಣಿಕರರೆ ಹೂಡಿರುವುದೀ ನಾಟಕ ! ||
ಆಯೋಗದನ್ಯಾಯ ಪ್ರತಿಭಟಿಸಿ, ಹತಪಡಿಸಿ
ಕೂಡುವುದು ಶತಃ ಸಿದ್ಧ ಕರ್ಣಾಟಕ || ೨ ||

ಕನ್ನಾಡ ಸಂಸ್ಕೃತಿಯ ಕಾಸರಾಗೋಡಿದನು
ತುಂಡರಿಸಿ ಕೇರಳಕ್ಕಂಟಗೊಡೆವು ||
ಕನ್ನಾಡ ಪರಿಶುದ್ಧ ಪುಣ್ಯ ಗರ್ಭಾಶ್ರಯವ
ಕೊರಲಗು ಕೊರೆದರೂ ನಾವು ಬಿಡೆವು || ೩ ||

ಕನ್ನಾಡ ವ್ಯಾಪಾರ ವ್ಯವಹಾರ ನಮಗಿರಲು
ಭವ್ಯ ಭವಿತವ್ಯವನು ಹಾಳುಗೆಡಹುವಿರ ||
ಮತಪಕ್ಷ ಭಾವನೆಯ ಕೊಳಚೆಯಾ ಕೂಪದಲಿ |
ಮುಳುಗುವುದೆ ? ಧರ್ಮಾಂಧ ಬಾಂಧವರಿರ || ೪ ||

ಉಂಡಮನೆಗೆರಡೆಣಿಸಿ ದ್ರೋಹಬಗೆದರೆ ಮುಂದೆ |
ಹೆತ್ತೊಡಲು ಸಹಿಸುವುದೆ ? ಮೇಲೇಳುವಾ ||
ಕರ್ತವ್ಯ ದಕ್ಷತೆಯ ಪಥವಿಡಿದು ಸಾಗುತ್ತ |
ಸಾಧನೆಯ ಫಲಪಡೆಯೆ ಮುನ್ನುಗ್ಗುವಾ || ೫ ||

— **"ಶಾಮು" ಪೊಸವಣಿಕೆ.**

---

# ಆಶಾಕಿರಣ

ಕನ್ನಡವಮ್ಮನ ನಾಡು ।
ಹೊನ್ನು ರನ್ನದ ಗೂಡು ।
ಅಸಮ ಕವಿ ಶಿಲ್ಪಿಗಳ ಸದನವೀ ಬೀಡು ।

ಚೆಲುವಿನಾ ತುಟ್ಟತುದಿ ।
ಗೆಲುವಿನಾ ಹಿಮವಂತ -
ನೌನ್ನತ್ಯವೇರಿರ್ದಳೀ ಕನ್ನಡಾಂಬೆ !

ಹಾಡಾಗಿ, ದನಿಯಾಗಿ,
ಕಬ್ಬದಾ ತೊರೆಯಾಗಿ
ದಿಗ್ದಿಶೆಯಃ ಹರಡುವೊಲು ಹಾಡಿಹೆರು ಮುಂದಿ !

ಕನ್ನಡಬ್ಬೆಯ ನುತಿಸಿ,
ಸ್ವಾರ್ಥಸಿದ್ಧಿಯಗಳಿಸಿ,
ಕೀರ್ತಿಯುತ ಜೀವನವೆ ಬರೆ ಮಂತ್ರ ಜಪಿಸಿ ।

ಸನ್ಯಾಸಿ ಸೋಗಿನೊಳು
ಈ ವೇಶ ನಾಡಿನೊಳು
ತುಂಬಿಬರಲೇನೆನಲಿ ? ಜನತೆಯಲಿ ಗೋಳು ।

ಐಕ್ಯ ಕನ್ನಡ ನಾಡು
ಐಕ್ಯ ಗೀತವ ಹಾಡು
ಐಕ್ಯ ಮತ ಹೊರತಿಲ್ಲ ಬಿಡುಗಡೆಯ ಹಾಡು ।

ಬಾಯಿಮಾತಿನ ಸೇವೆ
ಎಂಬ ತತ್ವವು ಸಾಯೆ
'ತಾಯಿ' ಕಾಣುವಳೇನೊ ಮೋಕ್ಷ ಕಿರಣವನು !

— ಕೆ. ಎಂ. ಕೃಷ್ಣ, ಕುಂಬಳೆ.

---

# ಸುದಿನೋದಯ !

ತನು, ಮನ, ಧನ, ನುಡಿಗನ್ನಡವೆಮ್ಮದು
ಕನ್ನಡಿಗರು ನಾವೆಂದೆಂದೂ ।
ಕನ್ನಡ ನಾಡೇ ಸೊಗದಾನಂದನ -
ವನ, ಬಿಡುಗಡೆಪಡೆದಿರಲೆಂದು ॥ ೧ ॥

ಹರಿ ಹಂಚಾಗಿಹೆ ಗತ ವೈಭವಗಳ ।
ಸೇರಿಸಿ ಮೆರೆಸಲು ಪಣಗೈದು
ತರುಣರು, ಕವಿಗಳು, ಕಾಣೆವು ಹೆಗೆಗಳ
ವರ ಕರ್ನಾಟಕ ಶಿಲ್ಪಿಗಳು ! ॥ ೨ ॥

ನವ ಕರ್ನಾಟಕ ಜಯ ಜಯ ಘೋಷವ
ನವಚೇತನದಿಂ ಪಡಿನುಡಿದು,
ದಿಗ್ದಿಶೆಯೊಮ್ಮನದಿಂದಲಿ ಸಾರಲಿ:
"ಚೇತನ ಸರ್ವಂ ಸರ್ವಮಯಂ !" ॥ ೩ ॥

ಕನ್ನಡ ದೇಶದೊಳುದಿಸಿದ ಪಾವನ -
ತೇಜವು ಜನತೆಯ ಮಿರುಗಿಂಗೆ!
ಸಾಸಿರಸೂರ್ಯರ ಮಧ್ಯದೊಳೆಸೆಯುವ
ಭಾಗ್ಯೋದಯವೀ ಕನ್ನಡಕೆ! ॥ ೪ ॥

ಕನ್ನಡದೈಸಿರಿ, ಸಂಸ್ಕೃತಿ ಶೋಭೆಯ
ಹೀರಿದ ವೀರರು ನಾವುಗಳು !
ಕನ್ನಡ ತಾಯಿಯ ವಿಜಯೋತ್ಸವವನು
ಸಾರಲು ನಾವೇ ಭಾಗಿಗಳು ! ॥ ೫ ॥

ಸುದಿನೋದಯ ರವಿಕಿರಣವನರಸುತ
ಹೃದಯೋದ್ಯಾನದೊಳೆಸೆಯುತಿದೆ !
ಅದುವೇ ಕನ್ನಡ ಕಲಿಗಳ ಕೀರ್ತಿಯ
ಗುಡಿಯೆಂದರಿಯಲಿ ಜಗವಿಂದೆ ! ॥ ೬ ॥

“ಮೌಢ್ಯವ ಬುಡಸಹಿತಟ್ಟಲು ಹೆಬ್ಬುಲಿ -
ಸಿಂಗಗಳಂತೆಯೆ ಹೋರಾಡಿ -
ಸಾವೂನೋವುಗಳೇನೇ ಬಂದರು
ದುಡಿಮೆಯ ನೆರಳಲಿ ಸವಿಸವಿಯು ” ॥ ೭ ॥

ಜರಾಮರಣಕೊಳಗಾಗದ ಪಣವಿದು !
ಕರುನಾಡಿಗರಾರ್ಜಿತ ಸೊತ್ತು !
ಜನುಮ ಭೂಮಿಯಾ ಸ್ವರ್ಣಯುಗಕಿದೊ -
ಜನುಮವು ನಮ್ಮದು ನಿಜಮುಡಿಪು ! ॥ ೮ ॥

— ಕೆ. ಎಂ. ಕೃಷ್ಣ, ಕುಂಬಳೆ.

---

# ಜಯ ಕರ್ಣಾಟಕ

ಜಯ ಕರ್ಣಾಟಕ ಮಾತೆ ಪುನೀತೆ !
ಸಂತತ ಶೋಭಿತೆ, ವಿಖ್ಯಾತೆ !
ಶಾಂತಿ ಸ್ವರೂಪಿಣಿಯಮರ ಸುಮಂಗಲೆ
ನಿರ್ಮಲ ಜೀವನ ಸುಖದಾತೆ ! ॥ ೧ ॥

ಮುನಿಜನ ವಂದಿತೆ, ಸಜ್ಜನ ಪೂಜಿತೆ !
ಮಂಗಳ ಮಹಿಮಾವರದಾತೆ !
ಕಾವ್ಯಕಲಾಮಯ ಸರಸಸುಜೀವನ
ಸಂಪದ ಸರ್ವಂ ತವ ವಿಭವಂ ! ॥ ೨ ॥

ಕನ್ನಡ ಮಾತೆಯ ಅಮೃತ ಸ್ತನ್ಯವ
ಹೀರಿದ ವೀರರು ನಾವುಗಳು !
ಕನ್ನಡ ತಾಯಿಯ ವಿಜಯೋತ್ಸವವನು
ಸಾರದೆ ಹೋದರೆ ಹೇಡಿಗಳು ! ॥ ೩ ॥

ಪುನರಪಿ ಜನನಂ ವೀರರ ಮರಣಂ !
ಸಾಹಸ ಶೌರ್ಯಂ ಶೌರ್ಯಮಯಂ
ಕರ್ಣಾಟಕದೊಳ್ "ದಾಸ್ಯ"ದ ಹರಣಂ
ಸರ್ವ ಸ್ವತಂತ್ರಂ ನಿಜಮಂತ್ರಂ ! ॥ ೪ ॥

ಕನ್ನಡ ನಾಡಿನ ವೀರ ಸುಪುತ್ರರೆ !
'ಕನ್ನಡ ನಾಡಿಗೆ' ಜಯವೆನ್ನಿ !
ಕನ್ನಡ ಬಾವುಟವೇರಲಿ, ಹಾರಲಿ !
ಕನ್ನಡಕೆಂದೂ ಗೆಲುವಿರಲಿ ! ॥ ೫ ॥

— ಕೆ. ಎಂ. ಕೃಷ್ಣ, ಕುಂಬಳೆ.

---

# ಸೇವೆ

ಪರಮ ಪೂಜ್ಯೆ ಕನ್ನಡಾಂಬೆ
ತೊರೆಯಲಾರೆ ನಿನ್ನನೆಂಬೆ
ಪ್ರೀತಿದೋರಿ ಸಲಹಿದಾತೆ
ಖ್ಯಾತಿವೆತ್ತ ಜನ್ಮದಾತೆ
ನಿನ್ನ ಸೇವೆ ಸಲಿಸುವೆ
ಬನ್ನಬರಲು ಸಹಿಸುವೆ ॥ ೧ ॥

ನಾಡನೋಡೆ ಕೊರತೆಯುಂಟೆ ?
ಬೆಡಗು ಬರಿದು ಕಾಣಲುಂಟೆ ?
ಕಲಿತ ನೀತಿ ಮರೆಯಲುಂಟೆ ?
ಬಲಿತ ದೇಹ ಸೊರಗಲುಂಟೆ ?
ನಿನ್ನ ಸೇವೆ ಸಲಿಸುವೆ
ಬನ್ನ ಬರಲು ಸಹಿಸುವೆ ॥ ೨ ॥

ಇಂದದೇನು ಕೇಡು ಬಂತೆ ?
ಕುಂದು ಬರುವುದೇತಕಂತೆ ?
ನ್ಯಾಯ ಪಡೆಯೆ ಹೊರಟು ನಿಂತೆ
ಸಾಯ ಬಡಿದರಿಲ್ಲ ಚಿಂತೆ
ನಿನ್ನ ಸೇವೆ ಸಲಿಸುವೆ
ಬನ್ನ ಬರಲು ಸಹಿಸುವೆ ॥ ೩ ॥

— ಮಹಮ್ಮದ್ ಹನೀಫ್.

---

# ನಮ್ಮ ನಾಡು ಕನ್ನಡ

ಪುಣ್ಯ ಭೂಮಿ |
ರಮ್ಯ ಭೂಮಿ |
ಜನ್ಮ ಭೂಮಿ ಕನ್ನಡ ||
ಅಶನ, ವಸನ |
ವಸತಿಯೆಲ್ಲ ನಮ್ಮದಿದುವೆ ಕನ್ನಡ || ೧ ||

ಪಾರ್ತಿ ಸುಬ್ಬ
ಯಕ್ಷಗಾನ
ಬರೆದು ಬಳೆದ ನಾಡಿದು ||
ರಾಷ್ಟ್ರಕವಿಯ
ಬಿರುದು ಪಡೆದ ಹಿರಿಯ "ಪೈ"ಯ ಬೀಡಿದು || ೨ ||

ಹಲವು ಪುಣ್ಯ
ಪುರುಷರೆಲ್ಲ
ಜನ್ಮ ತಳೆದ ನಾಡಿದು ||
ಭಾರತಕ್ಕೆ |
ತಿಲಕದಂತೆ | ಮಿರುಗು ಕೊಡುವ ನಾಡಿದು || ೩ ||

ತೆಂಗು ಕಂಗು |
ಕಾಳು ಮೆಣಸು
ತುಂಬಿ ಬೆಳೆವ ನಾಡಿದು ||
ಹಲಸು ಮಾವು
ಗೇರು ಬೀಜ ಬಹಳವಾಗಿ ಬೆಳೆವುದು || ೪ ||

ಇಂಥ ನಾಡು |
ಹೊನ್ನ ಬೀಡು
ಕಾಸ್ರಗೋಡು ಕನ್ನಡ ||
ಹರಿದು ಬರುವ
ಚಂದ್ರಗಿರಿಯ ತೆಂಕು ಗಡಿಯ ಕನ್ನಡ || ೫ ||

ನಮ್ಮ ನಾಡ
ನೆಲವನುಳಿಸೆ
ಶಕ್ತಿಮಿಾರಿ ಹೆಣಗುವ ||
ನಮ್ಮ ಬಲವ
ನಮ್ಮ ಛಲವ ತೋರುತಿಂದು ಸೆಣಸುವ || ೬ ||

— "ಶಾನು" ಪೊಸವಣಿಕೆ.

---

# ಎಚ್ಚರೆಚ್ಚರ ನಿಮಗೆ !

— ೧ —

ಸಿಡಿಮದ್ದು ಸಿಡಿದೆದ್ದು ಜಗವ ಸುಟ್ಟುರುಹಲಿಕೆ,
ನೆಪವಾಗಿ ಸಾಕೊಂದು ಸಣ್ಣ ಕಿಡಿಯು.
ಒರಗಿದ್ದ ಘಟಸರ್ಪ ಹೆಡೆಯೆತ್ತಿ ಕಡಿಯಲಿಕೆ,
ಹೆಳೆಯೆನಿಸಬಹುದೊಂದು ಸಣ್ಣ ಹುಡಿಯು.

— ೨ —

ತಪ್ತ ತೈಲದ ಭಾಂಡಕೊಂದು ಹನಿ ನೀರ್ತಗಲೆ,
ಅದರ ಪರಿಣಾಮವನು ಹೇಳಬೇಕೇ ?
ಕುದಿಯುತಿಹ ಕನ್ನಡದ ಕಲಿತನವು ಸಿಡಿದೇಳೆ,
ಅದರ ಫಲವೇನೆಂದು ಕಾಯಬೇಕೇ ?

— ೩ —

ಹಣ್ಣೆಂದು ಕೆಂಡವನು ಅಪ್ಪುತ್ತಲಿಹರೀಗ,
ಮಾಯಾವಿಗಳು ನಮ್ಮ ನಾಡ ತುಡುಕಿ ;
ಕನ್ನಡದ ಜನಜನವು, ಕನ್ನಡದ ಮನಮನವು,
ಆಸ್ಫೋಟಿಸುವುದಾಗ ಜ್ವಾಲಾಮುಖಿ !

— ೪ —

ಎಚ್ಚರೆಚ್ಚರ ನಿಮಗೆ! ಕನ್ನಾಡ ಬಾಂಧವರೆ,
ಬೆಳ್ಳಗಿಹುದೆಲ್ಲವೂ ಹಾಲೆ ಅಲ್ಲ !
ಪರನಾಡನಪಹರಿಪ ನರರೂಪದೀ ಜನರು,
ಮಾತಾಡ ಬಲ್ಲರೂ ಮನುಜರಲ್ಲ !

— ೫ —

ಎಚ್ಚರದ ಮಾತೊಂದ ಸಾರಿ ಹೇಳುವೆನೀಗ,
ಕನ್ನಾಡ ತುಳಿಯೆ ಕಾಲೆತ್ತಿದವರೆ !
ಕನ್ನಡಿಗರೆಂದಿಗೂ ಸಹಿಸರನ್ಯಾಯವನು ;
ಹರಿವುದವರಲ್ಲಿಯೂ ಬಿಸಿನೆತ್ತರೆ !

— ೬ —

ತಿಳಿದು ತಿಳಿದೂ ತಪ್ಪನೆಸಗುತಿಹ ಮೂರ್ಖರಿಗೆ,
ಇರುವುದೊಂದೇ ಮದ್ದು - ದಿವ್ಯೌಷಧ!
ದೊಣ್ಣೆಯನು ಹಿಡಿದಾಗ, ಎತ್ತಿ ಕತ್ತಿಯನಾಗ,
ಮೂರ್ಖತನ ಮರೆಯುವುದು! ಅರಿತಿಹೆವಿದ.

— ೭ —

ಓ ಬನ್ನಿ ಸೋದರರೆ, ಕನ್ನಾಡ ಬಾಂಧವರೆ,
ನ್ಯಾಯವೇನೆಂಬುದನು ತಿಳಿಸಿಕೊಡುವ!
ಎಚ್ಚರೆಚ್ಚರ ನಿಮಗೆ! ಕನ್ನಡದ ಸೋದರರೆ,
ಸತ್ಯಪಥದಲ್ಲಿ ನಾವು ಮುಂದೆ ನಡೆವ

ಕಾಸರಗೋಡು,
೮-೧೧-'೫೫.

**— ಗಣಪತಿ ನೊಳಿಯಾರ.**

---

# ಕನ್ನಡಿಗರೇಳಿರೈ !

ಕನ್ನಡಿಗರೇಳಿರೈ
ಎಚ್ಚೆತ್ತು ನೋಡಿರೈ
ಕೆಚ್ಚೆದೆಯ ಕನ್ನಡಿಗರೊಂದಾಗಿ ಕೇಳಿರೈ !

೧

ಆಯೋಗ- ವರದಿಯಲಿ
ಕಾರ್ಮೋಡದೊಡಲಿನಲಿ
ಕೋಲ್ಮಿಂಚ - ಮಿಂಚಿನಲಿ, ಸಿಡಿಮದ್ದ ರೂಪದಲಿ,
ಅಡಗಿರುವ ಸಿಡಿಲೊಂದು
ಕನ್ನಡವ ಸುಡಲೆಂದು
ಸಿಡಿದಿಹುದೆ ? ಸಿಡಿದಿಹುದು ! ಸಿಡಿಲಕಿಡಿ ಸಿಡಿದಿಹುದು !

೨

ಕನ್ನಡದ ಒಡಲಲ್ಲಿ
ಸಿಡಿದಿಹುದು ! ಸಿಡಿಸಿಡಿದು -
ಸುಡುತಿಹುದು ! ಕರುಳನ್ನು ಕೊರೆಕೊರೆದು ಕೊರೆದಿಹುದು !
ಅಯ್ಯೋ ! ಮನೆ ಹಾಳಾಯ್ತೆ ?
ಕನ್ನಡದ ನೆಲಸೊತ್ತು !
ಕನ್ನಡದ ಸಿರಿಮುತ್ತು ! ಅನ್ಯರಾ ಪಾಲಾಯ್ತೆ ?

೩

ಕನ್ನಡದ ಮಣ್ಣಾಗಿ
ಹೊನ್ನಾಗಿ - ಹೆಣ್ಣಾಗಿ
ಬಾಳಿರುವ ಈ ಹೆಣ್ಣು ನೆರೆಮನೆಯ ನೆಲೆ ಮಣ್ಣ -
ಸೇರಿ ತಾ ಬಾಳುವುದೆ ?
ಬಾಳಸವಿ ಬಣ್ಣಿಸಲೆ ?
ಬದುಕುಬವಣೆಯ ಗೋಳ - ಕಣ್ಣೀರ ಕರೆಸುವುದೆ ?

೪

ನ್ಯಾಯವನು ಬಲ್ಲವರು
ಸತ್ಯವನು ತಿಳಿದವರು

ಕನ್ನಡದ ಕತ್ತಿನೊಳು ಕತ್ತಿಯನ್ನಿಟ್ಟರೇ ?
ಕನ್ನಡಕೆ ಕಡಿತವೆ ?
ಅನ್ಯರಿಗೆ ಹಿಡಿತವೆ ?
ಕನ್ನಡದ ಚೆನ್ನುಡಿಯ ಕನ್ನಡಿಯನೊಡೆದರೆ ?

೫

ಎಲ್ಲೆಲ್ಲಿ ಕನ್ನಡದ
ಜನಮನವು ಕಳವಳಿಸೆ -
ಅಲ್ಲಲ್ಲಿ ಕನ್ನಡದ ರಕ್ತವದು ಕುದಿಕುದಿದು
ಬಿಸಿಯುಸಿರ ರೂಪದಲಿ
ಹೊರಬಂದ ಜ್ವಾಲೆಯದು
ಸುಡದಿಹುದೆ ? ಸುಡುತಿಹುದು! ಸುಡುತಲೇ ಸುಡುತಿಹುದು !

೬

ಕನ್ನಡದ ನೆಲದಲ್ಲಿ
ಜನಿಸಿರುವ ಸೋದರರು -
ಹಿಂದುಗಳು, ಮುಸ್ಲಿಮರು ಕ್ರಿಶ್ಚನರು ಎಲ್ಲರೂ
ಜಾತಿ ಭೇದವನುಳಿದು
ನೀತಿತತ್ವವಪಿಡಿದು
ಪ್ರೀತಿಯಿಂದೊಂದಾಗಿ ಕನ್ನಡದ ನೆಲವುಳಿಸಿ ।

೭

ಕನ್ನಡದ ನುಡಿಕಾಯೆ
ಕನ್ನಡದ ಗುಡಿಕಾಯೆ
ಗುರಿಯೆಡೆಗೆ ಶಾಂತಿಯಲಿ ಗುಡಿವಿಡಿದೆ ಸಾಗುವಾ ।
"ನಾಡಗಡಿ ಗುಡಿಕಾಯಿ
ಕಾಯಲಾರೆಯ ಸಾಯಿ"
ವೀರನುಡಿಯಿದ ನೆನೆದು ಗುರಿಯೆಡೆಗೆ ಸೇರುವಾ ॥

— ಅ. ನಾ. ಶೆಟ್ಟಿ, ಕಾಸರಗೋಡು.

---

# ದಾಹಾಗ್ನಿ........!

ಕೋಲ್ಮಿಂಚು ಗರಿಗೆದರಿ ಜ್ವಲಿಸುತಿಹುದೇನು!
ಕಾಲಮೇಘದ ಗುಡುಗು ಗರ್ಜಿಸುವುದೇನು! ‖ ೧ ‖

ಸಿಡಿಲು ಝಂಝಾವಾತ ಸಿಡಿದೆದ್ದ ಭೂತ,
ಶಾಂತಮಯ ಪ್ರಕೃತಿಯನು ಕೆರಳಿಸುವುದೇನು! ‖ ೨ ‖

ಸಾಮ್ರಾಜ್ಯ ದಾಹಾಗ್ನಿ ಜ್ವಾಲೆಯನು ಕಾರಿ
ಭುಗಿಲು ಭುಗಿಲೆಂದೇಕೊ ಬುಸುಗುಟ್ಟುತಿಹುದು! ‖ ೩ ‖

ನವರಾಜ್ಯ ನಿರ್ಮಾಣ! ನವಸಂಧಿ ಕಾಲ!
ಇದುವೇನು ಹೆತ್ತೊಡಲ ಸೆರೆಹಿಡಿವ ಜಾಲ! ‖ ೪ ‖

ಎನಿತೊ ಬವಣೆಗಳನ್ನು ತಿಂದುಂಡ ಸಹನೆ
ಮೇರೆ ಮೀರಿತು ನೊಂದು ಜನಪದದೊಳಿಂದು! ‖ ೫ ‖

ಹೊಸ ಸೃಷ್ಟಿಯವತಾರ ಜಟಿಲ, ಘನ, ಘೋರ!
ಜಾಗೃತಿಯ ಆಹ್ವಾನ! ಬೇಡ – ತಾತ್ಸಾರ! ‖ ೬ ‖

ಹೋಯಿತೋ ಮನೆ ಮಠವು ಸರ್ವಸ್ವ ನಾಶ!
ಕನ್ನಡಿಗರನು ಹಿಚುಕುತಿಹುದು ಯಮಪಾಶ! ‖ ೭ ‖

ಕೂಗಿಕರೆಯುವ ಶಕ್ತಿ ಎಮಗಿಲ್ಲದಾಯ್ತು!
ನಮ್ಮೊಡನೆ ದನಿಗೂಡಿ ಸಹಕಾರ ನೀಡಿ! ‖ ೮ ‖

'ಕೈಗೆ ಕೈ' ಸಿಲುಕುವುದು ಎಮಗೆ ಭೀಮ ಬಲ!
ಬಂದ ಮಾರಿಯ ನೂಕಿದರೆ ಜನುಮ ಸಫಲ! ‖ ೧೦ ‖

'ಸ್ವಾರ್ಥ ವಿಷಮಯ ಸರ್ಪ' ಕಡಿದು ಬಿಡಬಹುದು!
ಅದ ತರಿದು ಬನ್ನಿರೋ! ಸಲಿಸಿ ಪುರುಷಾರ್ಥ! ‖ ೧೧ ‖

**— ಕೆ. ಎಂ. ಕೃಷ್ಣ, ಕುಂಬಳೆ.**

---

## "ಎದ್ದೇಳು ಕನ್ನಡಿಗ !

### ಕಾಸರಗೋಡನ್ನು ಕನ್ನಡವಾಗಿಯೇ ಉಳಿಸು !"

ಇಂದು ಕಾಸರಗೋಡಿನ ಅಗ್ನಿಪರೀಕ್ಷೆಯಾಗುತ್ತಿದೆ. ಅದರ ಜೊತೆಯಲ್ಲಿ ನಮ್ಮ ಪರೀಕ್ಷೆಯೂ ನಡೆಯುತ್ತಿದೆ. ಕಾಸರಗೋಡನ್ನು ಕರ್ಣಾಟಕದಲ್ಲಿ ಉಳಿಸಲಾರದೆ ಹೋದರೆ ಕನ್ನಡ ಪರಂಪರೆಗೇ ಕಳಂಕವಾದೀತು. ಕನ್ನಡದ ಮುಂದಿನ ಪೀಳಿಗೆಗೆ ಘೋರವಾದ ಅನ್ಯಾಯ ಬಗೆದಂತಾದೀತು. ಎರಡುಲಕ್ಷ ಕನ್ನಡಿಗರನ್ನು ಸಜೀವದಹನಮಾಡಿದಂತಾದೀತು.

.................

"ಕಾಸರಗೋಡು ಕನ್ನಡನಾಡು" ಎಂಬ ವಿವೇಚನಾತ್ಮಕವಾದ ಹೊತ್ತಗೆಯನ್ನು ಪ್ರಕಟಿಸಿದ ಕಾಸರಗೋಡಿನ "ಪಂಪ ಪ್ರಕಾಶನ"ದ ಇನ್ನೊಂದು ಪ್ರಕಟನೆ ಇದು — **"ಎದ್ದೇಳು ಕನ್ನಡಿಗ"**

ಜೈ ಕರ್ನಾಟಕ !